# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 439

ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್)

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 06-03-2020

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ಹೆಚ್.ಡಿ.ಕೋಟೆಯಿಂದ ನೂತನ ತಾಲ್ಲೂಕು ಕೇಂದ್ರವಾದ ಸರಗೂರಿಗೆ ಸಾರಿಗೆ ಬಸ್ ಸೌಲಭ್ಯ ಹೆಚ್ಚಿಸಲು ಹಾಗೂ ಈ ಬಸ್‌ಗಳನ್ನು ಹೆಗ್ಗಡದೇವನಕೋಟೆ ಬಸ್ ಡಿಪೋಗೆ ಸೇರಿರುವ ಬಸ್‌ಗಳನ್ನೇ ಒದಗಿಸಲು ಕ್ರಮ ಜರುಗಿಸಲಾಗುವುದೇ; | ಪ್ರಸ್ತುತ ಹೆಚ್.ಡಿ.ಕೋಟೆಯಿಂದ ಸರಗೂರಿಗೆ ಹಾಗೂ ಸರಗೂರಿನಿಂದ ಹೆಚ್.ಡಿ.ಕೋಟೆಗೆ ತಲಾ 66 ಸುತ್ತುವಳಿಗಳನ್ನು ಕಾರ್ಯಾಚರಣೆ ಮಾಡಲಾಗುತ್ತಿದೆ. ಈ ಪೈಕಿ ಹೆಚ್.ಡಿ.ಕೋಟೆ ಘಟಕದಿಂದಲೇ 54 ಸುತ್ತುವಳಿಗಳು ಕಾರ್ಯಾಚರಣೆಯಾಗುತ್ತಿವೆ. ಪ್ರಸ್ತುತ ಸದರಿ ಮಾರ್ಗದಲ್ಲಿ ಅಗತ್ಯಕ್ಕನುಗುಣವಾಗಿ ಸಾರಿಗೆ ಕಾರ್ಯಾಚರಣೆ ಮಾಡಲಾಗುತ್ತಿದ್ದು, ಸಮರ್ಪಕವಾಗಿರುತ್ತದೆ. |
| ಆ) | ಕೊತ್ತೇಗಾಲ, ಪುರದಕಟ್ಟೆ, ಹಲಸೂರು, ಮಟಕೆರೆ, ಬಾಳಿಗ, ಹಂಚಿಪುರ, ಚೆನ್ನಗುಂಡಿ, ಹರಳಹಳ್ಳಿ, ಹಾದನೂರು, ಬಡಗಲಪುರ, ಹೆಡಿಯಾಲ ಮೊದಲಾದ ಕಡೆಗಳಿಂದ ಬರುವ ಸಾರ್ವಜನಿಕರು ಹಾಗೂ ಶಾಲಾ ಮಕ್ಕಳಿಗೆ ಸೂಕ್ತ ಕಾಲಕ್ಕೆ ಬಸ್‌ಗಳಿಲ್ಲದೆ ತೊಂದರೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೊತ್ತೆಗಾಲ, ಪುರದಕಟ್ಟೆ, ಹಲಸೂರು, ಮಟಕೆರೆ, ಬಾಳಿಗ, ಹಂಚಿಪುರ, ಚೆನ್ನಗುಂಡಿ, ಹರಳಹಳ್ಳಿ, ಹಾದನೂರು, ಬಡಗಲಪುರ, ಹೆಡಿಯಾಲ ಮೊದಲಾದ ಕಡೆಗಳಿಂದ ಬರುವ ಸಾರ್ವಜನಿಕರು ಹಾಗೂ ಶಾಲಾ ಮಕ್ಕಳಿಗೆ ಅವಶ್ಯಕತೆಗೆ ತಕ್ಕಂತೆ ಸಾರಿಗೆಗಳು ಕಾರ್ಯಾಚರಣೆಯಲ್ಲಿದ್ದು, ವಿವರಗಳು ಈ ಕೆಳಕಂಡಂತಿವೆ. |

| ಕ್ರಸಂ | ಸ್ಥಳಗಳು | ನಿರ್ಗಮನದ ಸಮಯ |
|---|---|---|
| 1 | ಕೊತ್ತೇಗಾಲ | ಬೆಳಿಗ್ಗೆ 6.00ರಿಂದ ರಾತ್ರಿ 8.45 ಗಂಟೆಯವರೆಗೆ ಪ್ರತಿ 30 ನಿಮಿಷಕ್ಕೊಂದರಂತೆ ಸಾರಿಗೆಗಳು ಕಾರ್ಯಾಚರಣೆಯಲ್ಲಿರುತ್ತದೆ. |
| 2 | ಪುರದಕಟ್ಟೆ | |
| 3 | ಹಲಸೂರು | |
| 4 | ಮಟಕೆರೆ | ಬೆಳಿಗ್ಗೆ 6.15ರಿಂದ ರಾತ್ರಿ 8.30 ಗಂಟೆಯವರೆಗೆ ಪ್ರತಿ 1 ಗಂಟೆಗೊಂದರಂತೆ ಸಾರಿಗೆಗಳು ಕಾರ್ಯಾಚರಣೆಯಲ್ಲಿರುತ್ತದೆ. |
| 5 | ಬಾಳಿಗ | |
| 6 | ಹಂಚೀಪುರ | |
| 7 | ಚೆನ್ನಗುಂಡಿ | ಹೆಡಿಯಾಲದಿಂದ ಚೆನ್ನಗುಂಡಿಗೆ ಬೆಳಿಗ್ಗೆ 7.30 ಗಂಟೆಗೆ ಮತ್ತು ಸಂಜೆ 4.30 ಗಂಟೆಗೆ ಹಾಗೂ ಚೆನ್ನಗುಂಡಿಯಿಂದ ಬೆಳಿಗ್ಗೆ 08.45 ಮತ್ತು ಸಾಯಂಕಾಲ 5.45 ಸಾರಿಗೆಗಳು ಕಾರ್ಯಾಚರಣೆಯಲ್ಲಿರುತ್ತವೆ. |

| | | |
|---|---|---|
| 8 | ಹರಳಹಳ್ಳಿ | ಸದರಿ ಗ್ರಾಮಗಳು ಹೆಡಿಯಾಲ ಮತ್ತುಚಿಕ್ಕಬರ್ಗಿ ಮಾರ್ಗ ಮಧ್ಯೆ ಬರುವಂತಹ ಗಾಮಗಳಾಗಿದ್ದು, ಬೆಳಿಗ್ಗೆ 7.30, 9.30 ಗಂಟೆಗೆ ಮತ್ತು ರಾತ್ರಿ8.00 ಗಂಟೆಗೆ ಸರಗೂರಿನಿಂದ ನೇರವಾಗಿ ಸದರಿ ಸ್ಥಳಗಳಿಗೆ ಸಾರಿಗೆಗಳಿರುತ್ತವೆ. ಉಳಿದ ಸಮಯದಲ್ಲಿ ಸರಗೂರಿನಿಂದ ಪ್ರತಿ 30 ನಿಮಿಷಕ್ಕೆ ಕಾರ್ಯಾಚರಣೆಯಾಗುವ ಹೆಡಿಯಾಲ ಸಾರಿಗೆಗಳಲ್ಲಿ ಪ್ರಯಾಣಿಸಿ ಹೆಡಿಯಾಲದಿಂದ ಹರಳಹಳ್ಳಿ, ಹಾದನೂರು, ಬಡಗಲಪುರ ಮಾರ್ಗವಾಗಿ ಚಿಕ್ಕಬರ್ಗಿಗೆ 06.00, 9.00, 12.00, 14.00 17.30 ಮತ್ತು 20.00 ಗಂಟೆಗೆ ಹಾಗೂ ಚಿಕ್ಕಬರ್ಗಿಯಿಂದ 10.00 13.00 15.00 18.30 ಸಾರಿಗೆಗಳು ಕಾರ್ಯಾಚರಣೆಯಲ್ಲಿದ್ದು, ಪ್ರಸ್ತುತ ಸಾರ್ವಜನಿಕರು ಮತ್ತು ವಿದ್ಯಾರ್ಥಿಗಳು ಸದರಿ ಸಾರಿಗೆಗಳ ಉಪಯೋಗ ಪಡೆದುಕೊಳ್ಳುತ್ತಿರುತ್ತಾರೆ. |
| 9 | ಹಾದನೂರು | |
| 10 | ಬಡಗಲಪುರ | |
| 11 | ಹೆಡಿಯಾಲ | ಬೆಳಿಗ್ಗೆ 6.00 ರಿಂದರಾತ್ರಿ 8.45ಗಂಟೆಯವರೆಗೆ ಪ್ರತಿ 30 ನಿಮಿಷಕ್ಕೊಂದರಂತೆ ಸಾರಿಗೆಗಳು ಕಾರ್ಯಾಚರಣೆಯಲ್ಲಿರುತ್ತದೆ. |

| | | |
|---|---|---|
| ಇ) | ಚೆನ್ನಗುಂಡಿ ಗ್ರಾಮದಿಂದ ಸರಗೂರು, ಹೆಚ್.ಡಿ.ಕೋಟೆಗೆ ನೇರ ಬಸ್ ಸೌಲಭ್ಯ ಇಲ್ಲದೇ ಈ ಗ್ರಾಮ ಹಾಗೂ ಸುತ್ತಮುತ್ತಲ ಗ್ರಾಮಸ್ಥರು ಹೆಡಿಯಾಲಕ್ಕೆ ಬಂದು ಬಸ್ ಹತ್ತಬೇಕಾಗಿರುವುದರಿಂದ ಚೆನ್ನಗುಂಡಿಯಿಂದ ನೇರ ಬಸ್ ಸೌಲಭ್ಯ ಕಲ್ಪಿಸಲು ಕ್ರಮ ಜರುಗಿಸಲಾಗುವುದೇ? | ಚೆನ್ನಗುಂಡಿಯಿಂದ ಸರಗೂರಿಗೆ ಸಾರಿಗೆಗಳನ್ನು ಕಾರ್ಯಾಚರಣೆ ಮಾಡುವ ಬಗ್ಗೆ ಪರಿಶೀಲಿಸಲಾಗುತ್ತದೆ. |

ಸಂಖ್ಯೆ: ಟಿಡಿ 46 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು